

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 869 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ಸಚಿವರು | ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | 20-09-2021 |

| | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಪ್ರತಿಷ್ಠಿತ ವಿಶ್ವವಿದ್ಯಾಲಯಗಳಲ್ಲಿ ಪದವಿಯ ನಕಲು ಅಂಕಪಟ್ಟಿಗಳ ಮಾರಾಟ ದಂಧೆ ಅವ್ಯಾಹತವಾಗಿ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಒಟ್ಟು 23 ವಿಶ್ವವಿದ್ಯಾಲಯಗಳಿದ್ದು, ಇವುಗಳಲ್ಲಿ 22 ವಿಶ್ವವಿದ್ಯಾಲಯಗಳಲ್ಲಿ ನಕಲು ಅಂಕಪಟ್ಟಿಗಳ ಮಾರಾಟ ಪ್ರಕರಣಗಳು ವರದಿಯಾಗಿರುವುದಿಲ್ಲ. ಆದರೆ, ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕಾನೂನು ಪದವಿಯ ನಕಲಿ ಅಂಕಪಟ್ಟಿ ಮತ್ತು ನಕಲಿ ಪ್ರಮಾಣ ಪತ್ರವನ್ನು ವಿತರಿಸಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| (ಆ) | ಹಾಗಿದ್ದಲ್ಲಿ, ನಕಲಿ ಅಂಕಪಟ್ಟಿಗಳ ದಂಧೆಕೋರರ ಹಾವಳಿ ತಡೆಯುವ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಂಡ ಕಠಿಣ ಕ್ರಮಗಳೇನು; (ವಿವರ ಒದಗಿಸುವುದು) | ವಿದ್ಯಾರ್ಥಿಗಳ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳನ್ನು ನೈಸರ್ಗಿಕ ವಿಕೋಪದಿಂದ ಹಾನಿಯಾಗುವುದನ್ನು ತಪ್ಪಿಸಲು, ದೀರ್ಘಕಾಲ ಸಂಗ್ರಹಿಸಿಡಲು, ಕೆಲವು ಸಂದರ್ಭಗಳಲ್ಲಿ ಕಳ್ಳತನ ಆಗುವ ಸಂಭವವನ್ನು ತಪ್ಪಿಸುವ ಸಲುವಾಗಿ ಮತ್ತು ಪಾರದರ್ಶಕತೆಯನ್ನು ಹೆಚ್ಚಿಸಲು, ಸುಲಭವಾಗಿ ಮಕ್ಕಳಿಗೆ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳು ದೊರಕುವಂತೆ ಮಾಡಲು ಉನ್ನತ ಶಿಕ್ಷಣ ಇಲಾಖೆ ವ್ಯಾಪ್ತಿಯ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ವಿದ್ಯಾರ್ಥಿಗಳಿಗೆ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳನ್ನು ಡಿಜಿಟಲ್ ರೂಪದಲ್ಲಿ ಸಿದ್ದಪಡಿಸಿ, Karnataka State Data Center (KSDC)ನಲ್ಲಿ ಶೇಖರಿಸಿ ಮತ್ತು ಪ್ರತಿಗಳನ್ನು National Academic Depository (NAD) ಮತ್ತು DigiLocker ನಲ್ಲಿ ಕಡ್ಡಾಯವಾಗಿ ಅಳವಡಿಸಿ ಅನುಷ್ಠಾನಗೊಳಿಸಲಾಗಿದೆ. ಅಂಕಪತ್ರಗಳನ್ನು ಮತ್ತು ಪ್ರಮಾಣ ಪತ್ರಗಳನ್ನು ಮುದ್ರಿಸದಿರಲು ಸರ್ಕಾರದ ಪತ್ರ ಸಂಖ್ಯೆ: ಇಡಿ 41 ಇಜಿಓವಿ 2020, ದಿ:04-07-2020 ರಲ್ಲಿ ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳಿಗೆ ನಿರ್ದೇಶನ ನೀಡಲಾಗಿರುತ್ತದೆ. |
| (ಇ) | ಈ ಅಕ್ರಮ ನಕಲಿ ಅಂಕಪಟ್ಟಿ ದಂಧೆಗೆ ಯಾವ ಶಾಶ್ವತ ಪರಿಹಾರವನ್ನು ಸರ್ಕಾರ ರೂಪಿಸಿದೆ; (ವಿವರ ನೀಡುವುದು) | |
| (ಈ) | ಈವರೆಗೆ ಎಷ್ಟು ಮಂದಿಗೆ ಅಕ್ರಮ ನಕಲಿ ಪದವಿ ಅಂಕಪಟ್ಟಿಗಳನ್ನು ವಿತರಿಸಲಾಗಿದೆ; ಮಾರಾಟ ಮಾಡಲಾಗಿದ್ದ ಎಲ್ಲಾ ನಕಲಿ ಅಂಕಪಟ್ಟಿಗಳನ್ನು ವಶಪಡಿಸಿಕೊಳ್ಳಲಾಗಿದೆಯೇ; | ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಶ್ರೀ ಎಜಾಜ್ ಅಹಮದ್ ಖಾನ್ ಎಂಬುವವರಿಗೆ ನಕಲಿ ಅಂಕಪಟ್ಟಿಗಳನ್ನು ನೀಡಿರುವುದು ಕಂಡು ಬಂದಿದ್ದು, ಸದರಿಯವರ ಕಾನೂನು ಪದವಿಯ ಮೂರು ವರ್ಷದ ಮೂಲ ಅಂಕಪಟ್ಟಿಗಳನ್ನು ಮತ್ತು ಮೂಲ ಪದವಿ ಪ್ರಮಾಣ ಪತ್ರಗಳನ್ನು ಬೆಂಗಳೂರು ವಿಶ್ವವಿದ್ಯಾಲಯವು ವಶಪಡಿಸಿಕೊಂಡಿರುತ್ತದೆ. |
| (ಉ) | ನಕಲಿ ಅಂಕಪಟ್ಟಿಗಳ ಮಾರಾಟ ಜಾಲದಲ್ಲಿ ಎಷ್ಟು ಮಂದಿ ಭಾಗಿಯಾಗಿದ್ದಾರೆ; ಇದರ ವಿಸ್ತಾರ ಎಲ್ಲಿಯವರೆಗೆ ಹರಡಿದೆ? (ಸಂಪೂರ್ಣ ವಿವರ ಒದಗಿಸುವುದು) | ಶ್ರೀ ಎಜಾಜ್ ಅಹಮದ್ ಖಾನ್‌ರವರ ವಿರುದ್ಧ ದಿನಾಂಕ: 05-01-2021ರಂದು ಜ್ಞಾನಭಾರತಿ ಪೊಲೀಸ್ ಠಾಣೆಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯವು ದೂರು ದಾಖಲಿಸಿದ್ದು, ಪ್ರಸ್ತುತ ಸದರಿ ಪ್ರಕರಣವು ತನಿಖಾ ಹಂತದಲ್ಲಿರುತ್ತದೆ. |

ಸಂಖ್ಯೆ: ಇಡಿ 234 ಯುಎನ್‌ಇ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉನ್ನತ ಶಿಕ್ಷಣ, ಐಟಿ & ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.